೬೦

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಸುನೀಲ್ ವಲ್ಯಾಪುರ್ (ವಿಧಾನಸಭೆಯಿಂದ ಚುನಾಯಿತರಾದವರು)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 541

ಉತ್ತರ ದಿನಾಂಕ : 05.02.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಲಬುರಗಿ, ಬೀದರ್, ಯಾದಗಿರಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆಯಿರುವ ಗ್ರಾಮಗಳೆಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ಬೀದರ್, ಕಲಬುರಗಿ ಹಾಗೂ ಯಾದಗಿರಿ ಜಿಲ್ಲೆಗಳ ಗ್ರಾಮೀಣ ಪ್ರದೇಶಗಳಲ್ಲಿ ಬರುವ ಗ್ರಾಮಗಳಲ್ಲಿ ಪ್ರಸ್ತುತ ಕುಡಿಯುವ ನೀರಿನ ಸಮಸ್ಯೆ ಉದ್ಭವಿಸಿರುವುದಿಲ್ಲ.<br>ಬಾಕಿ ಉಳಿದ ಜಿಲ್ಲೆಗಳಾದ ರಾಯಚೂರು, ಕೊಪ್ಪಳ ಹಾಗೂ ಬಳ್ಳಾರಿಯಲ್ಲಿ ಕುಡಿಯುವ ನೀರಿನ ಸಮಸ್ಯೆಯಿರುವ ಗ್ರಾಮಗಳ ಸಂಖ್ಯೆಯ ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಆ. | ಕುಡಿಯುವ ನೀರಿನ ಸಮಸ್ಯೆ ಇರುವ ಗ್ರಾಮಗಳಿಗೆ ಟ್ಯಾಂಕರ್ ಮತ್ತು ಖಾಸಗಿ ಕೊಳವೆ ಬಾವಿಗಳ ಮೂಲಕ ನೀರು ಸರಬರಾಜು ಮಾಡಲಾಗುತ್ತಿದೆಯೇ; (ವಿವರ ನೀಡುವುದು) | ರಾಯಚೂರು, ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆಯಿರುವ ಗ್ರಾಮಗಳಲ್ಲಿ ಖಾಸಗಿ ಕೊಳವೆ ಬಾವಿಗಳ ಮೂಲಕ ನೀರು ಸರಬರಾಜು ಮಾಡಲಾಗುತ್ತಿದ್ದು, ಗ್ರಾಮಗಳ ಸಂಖ್ಯೆಯ ವಿವರಗಳನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಇ. | ಶಾಶ್ವತವಾಗಿ ಕುಡಿಯುವ ನೀರು ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | <u>ರಾಯಚೂರು:</u> ರಾಯಚೂರು ಜಿಲ್ಲೆಯ ಎಲ್ಲಾ ಜನವಸತಿಗಳಿಗೆ ಶಾಶ್ವತ ಕುಡಿಯುವ ನೀರನ್ನು ಒದಗಿಸಲು "ಜಲಧಾರೆ" ಯೋಜನೆ ಅನುಮೋದನೆಗೊಂಡಿದ್ದು, ಸದರಿ ಯೋಜನೆಯ ಪಿ.ಎಸ್.ಆರ್ ಅನ್ನು ದಿನಾಂಕ:21.11.2020ರಂದು ನಡೆದ STA ಸಭೆಯಲ್ಲಿ ಮಂಡಿಸಲಾಗಿದ್ದು, ಕೆಲವೊಂದು ಬದಲಾವಣೆಗಳನ್ನು ಸೂಚಿಸಲಾಗಿದ್ದು, ಸದರಿ ಬದಲಾವಣೆಗಳನ್ನೊಳಗೊಂಡ ಪರಿಷ್ಕೃತ ಪಿ.ಎಸ್.ಆರ್ ಪರಿಶೀಲನಾ ಹಂತದಲ್ಲಿದ್ದು, ಅನುದಾನದ ಲಭ್ಯತೆಯನ್ನು ಆಧರಿಸಿ ಪಿ.ಎಸ್.ಆರ್‌ಗೆ ಆಡಳಿತಾತ್ಮಕ ಅನುಮೋದನೆ ದೊರೆತ ಕೂಡಲೇ ಕೆ.ಟಿ.ಪಿ.ಪಿ ನಿಯಮಾನುಸಾರ ಟೆಂಡರ್ ಕರೆದು ಕಾಮಗಾರಿಯನ್ನು ಕೈಗೊಂಡು ಜಿಲ್ಲೆಯ ಎಲ್ಲಾ ಗ್ರಾಮೀಣ ಪ್ರದೇಶಗಳಿಗೆ ಶುದ್ಧ ಕುಡಿಯುವ ನೀರನ್ನು ಒದಗಿಸಲು ಕ್ರಮವಹಿಸಲಾಗುವುದು.<br><u>ಕೊಪ್ಪಳ:</u> ಕುಷ್ಟಗಿ ಹಾಗೂ ಯಲಬುರ್ಗ ತಾಲ್ಲೂಕುಗಳಲ್ಲಿ ಕುಡಿಯುವ ನೀರಿನ ಶಾಶ್ವತ ಪರಿಹಾರಕ್ಕಾಗಿ ಡಿ.ಬಿ.ಓ.ಟಿ. ಆಧಾರಿತ ಬಹುಗ್ರಾಮ ಕುಡಿಯುವ ನೀರಿನ ಯೋಜನೆಯು ಅನುಮೋದನೆಯಾಗಿ, ಪ್ರಗತಿಯಲ್ಲಿದ್ದು, ಪೂರ್ಣಗೊಳ್ಳುವ ಹಂತದಲ್ಲಿರುತ್ತದೆ. ಹಾಗೂ ಗಂಗಾವತಿ ತಾಲ್ಲೂಕಿನಲ್ಲಿ ಕುಡಿಯುವ ನೀರಿನ ಶಾಶ್ವತ ಪರಿಹಾರಕ್ಕಾಗಿ ಜೆ.ಜೆ.ಎಂ ಅಡಿಯಲ್ಲಿ 3 ಸಂಖ್ಯೆಯ ಹೊಸ ಬಹುಗ್ರಾಮ ಕುಡಿಯುವ ನೀರಿನ ಯೋಜನೆಗಳನ್ನು ಕೈಗೆತ್ತಿಕೊಂಡಿದ್ದು, ಡಿ.ಪಿ.ಆರ್ ತಯಾರಿಕಾ ಹಂತದಲ್ಲಿರುತ್ತದೆ. ಅನುದಾನದ ಲಭ್ಯತೆಯನ್ನು ಆಧರಿಸಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಕ್ರಮವಹಿಸಲಾಗುವುದು.<br><u>ಬಳ್ಳಾರಿ:</u> ಜಲಮೂಲದ ಸುಸ್ಥಿರತೆಯನ್ನು ಖಚಿತಪಡಿಸಿಕೊಂಡು ಅನುದಾನ ಲಭ್ಯತೆಯನುಸಾರ ಶಾಶ್ವತವಾಗಿ ಕುಡಿಯುವ ನೀರು ಒದಗಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲು ಯೋಜಿಸಲಾಗುವುದು. |

**ಸಂ:ಗ್ರಾಕುನೀ&ನೈಇ 152 ಗ್ರಾನೀಸ(4)2020**

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಗ್ರಾಮೀಣಾಭಿವೃದ್ಧಿ ಮತ್ತು

ಪಂಚಾಯತ್ ರಾಜ್ ಸಚಿವರು

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:- 541ರ ಲಗತ್ತು

# ಅನುಬಂಧ – 1

## ಸಮಸ್ಯಾತ್ಮಕ ಗ್ರಾಮಗಳ ವಿವರ ಹಾಗೂ ಟ್ಯಾಂಕರ್ ಮತ್ತು ಖಾಸಗಿ ಕೊಳವೆ ಬಾವಿಗಳ ಮೂಲಕ ನೀರು ಸರಬರಾಜು ಮಾಡುತ್ತಿರುವ ವಿವರಗಳು

| ಕ್ರ.ಸಂ. | ಜಿಲ್ಲೆ | ತಾಲ್ಲೂಕು | ಕುಡಿಯುವ ನೀರಿನ ಸಮಸ್ಯೆಯಿರುವ ಗ್ರಾಮಗಳ ಸಂಖ್ಯೆ | ಗ್ರಾಮಗಳಿಗೆ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡುತ್ತಿರುವ ಟ್ಯಾಂಕರ್‌ಗಳ ಸಂಖ್ಯೆ | ಬಾಡಿಗೆ ಪಡೆದ ಖಾಸಗಿ ಬೋರವೆಲ್‌ಗಳ ಸಂಖ್ಯೆ | ಷರಾ |
|---|---|---|---|---|---|---|
| 1 | ರಾಯಚೂರು | ರಾಯಚೂರು | 1 | 0 | 0 | ಸದರಿ ಗ್ರಾಮಗಳಲ್ಲಿ Task Force & MP MLA LAD ಯೋಜನೆಗಳ ಅನುದಾನದ ಅಡಿಯಲ್ಲಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು, ಕುಡಿಯುವ ನೀರಿನ ಕಾಮಗಾರಿಗಳನ್ನು ಪೂರ್ಣಗೊಳಿಸಿ, ನೀರು ಸರಬರಾಜು ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. |
| | | ಮಾನ್ವಿ | 5 | 0 | 0 | |
| | | ದೇವದುರ್ಗ | 3 | 0 | 0 | |
| | | ಲಿಂಗಸಗೂರು | 1 | 0 | 0 | |
| | ಒಟ್ಟು | | **10** | **0** | **0** | |
| 2 | ಕೊಪ್ಪಳ | ಗಂಗಾವತಿ | 1 | 0 | 1 | |
| | | ಕನಕಗಿರಿ | 3 | 0 | 3 | |
| | | ಕುಷ್ಟಗಿ | 17 | 0 | 24 | |
| | | ಯಲಬುರ್ಗಾ | 2 | 0 | 2 | |
| | | ಕುಕನೂರು | 1 | 0 | 1 | |
| | ಒಟ್ಟು | | **24** | **0** | **31** | |
| 3 | ಬಳ್ಳಾರಿ | ಹೊಸಪೇಟೆ | 2 | 0 | 4 | |
| | ಒಟ್ಟು | | **2** | **0** | **4** | |